# ಮೊದಲ ಬೋಧನಾ ಸಾಧನವಾಗಿ ಕಪ್ಪು ಹಲಗೆ

**ಫರ್ಹೀನಾ ಸಲೀಂ**

ಬದಲಾಗುತ್ತಿರುವ ಜಗತ್ತು ಹಾಗೂ ಮನಸ್ಥಿತಿಗಳ ಜೊತೆ ಜೊತೆಗೆ ಶಾಲಾ ಶಿಕ್ಷಣ ಹಾಗೂ ಕಲಿಕೆಯೂ ಬಹಳ ಮಟ್ಟಿಗೆ ಬದಲಾಗಿದೆ. ಹೆಚ್ಚಾಗುತ್ತಿರುವ ತಾಂತ್ರಿಕ ನೆರವು ಹಾಗೂ ಮಾಹಿತಿಯ ಲಭ್ಯತೆಯ ಕಾರಣದಿಂದ ಇಂದಿನ ತರಗತಿಗಳು ಹಾಗೂ ಶಿಕ್ಷಕರು ಉತ್ತಮವಾಗಿ ಅಣಿಗೊಂಡಿದ್ದು ಕಲಿಕಾರ್ಥಿಗಳೂ ಕೂಡ ಜ್ಞಾನ ಸಂಗ್ರಹಣೆಯಲ್ಲಿ, ಕೌಶಲಗಳನ್ನು ಕಲಿಯುವಲ್ಲಿ, ಹೆಚ್ಚು ಸೃಜನಶೀಲರಾಗುವಲ್ಲಿ ಹಾಗೂ ವಿಭಿನ್ನ ಆಯಾಮಗಳಲ್ಲಿ ಕಲಿಯುವುದನ್ನು ನೋಡುವಾಗ ಪ್ರೋತ್ಸಾಹ ಹಾಗೂ ಉತ್ಸಾಹ ಎರಡೂ ಉಂಟಾಗುತ್ತದೆ.

ಬಹಳಷ್ಟು ಶಾಲೆಗಳಲ್ಲಿ, ನಿರ್ದಿಷ್ಟವಾಗಿ ಸಾರ್ವಜನಿಕ ಶಾಲೆಗಳಲ್ಲಿ, ಡಿಜಿ-ಬೋರ್ಡ್‌ನ, ಅಂತರ್ಜಾಲದ ಲಭ್ಯತೆಯ ಹಾಗೂ ವಿದ್ಯಾರ್ಥಿಗಳಿಗೆ ಹೆಚ್ಚಿನ ಸಂಖ್ಯೆಯಲ್ಲಿ ಕಂಪ್ಯೂಟರ್ ಗಳು ಲಭ್ಯವಾಗುವಂತೆ ಖಾತ್ರಿಪಡಿಸಿಕೊಳ್ಳುತ್ತಿರುವುದರಿಂದ ಶಿಕ್ಷಕರ ಪಾತ್ರ ಕೊಂಚ ಮಟ್ಟಿಗೆ ಬದಲಾಗಿದೆ ಎಂದೇ ಹೇಳಬಹುದು. ಶಿಕ್ಷಕರು ಮಾಹಿತಿ ಹಾಗೂ ಜ್ಞಾನದ ಏಕಮೇವ ಮೂಲಗಳಾಗಿ ಉಳಿದಿಲ್ಲ. ಬಹಳಷ್ಟು ಸಲ, ಕಲಿಸುವುದು ಒಂದು ಸವಾಲೇ ಆಗುತ್ತದೆ, ಏಕೆಂದರೆ ಶಿಕ್ಷಕರು ಹೇಳಬೇಕಾದ ಅಥವಾ ವಿವರಿಸಬೇಕಾದ ಅಥವಾ ಪರಿಚಯಿಸಬೇಕಾದ, ಪಠ್ಯಕ್ರಮದ ಮಾರ್ಗದರ್ಶನದಂತೆ ಒಂದು ನಿರ್ದಿಷ್ಟ ವಯೋ-ಮಿತಿಗೆಂದೇ ಮೀಸಲಾದ ವಿಷಯಗಳು, ಮಕ್ಕಳಿಗೆ ಹೊಸ ವಿಷಯವೇ ಆಗಿರುವುದಿಲ್ಲ. ಏಕೆಂದರೆ ಮಾಹಿತಿ ಸುಲಭವಾಗಿ ಸಿಗುತ್ತದೆ. ಕಲಿಯುವವರು ಇಂಥ ವಿಷಯಗಳಿಗೆ ತಮ್ಮನ್ನು ತಾವು ಚೆನ್ನಾಗಿ ತೆರೆದುಕೊಂಡಿರುತ್ತಾರೆ.

ಶಾಲೆಗಳು ಹಾಗೂ ಬೋಧನೆ ಹೆಚ್ಚು ವಿದ್ಯಾರ್ಥಿ-ಕೇಂದ್ರಿತವಾಗುತ್ತಿರುವುದನ್ನೂ ತಂತ್ರಜ್ಞಾನದ ಬಳಕೆ, ವಿಡಿಯೋಗಳು, ಚಲನಚಿತ್ರಗಳು, ಪ್ರಾಯೋಗಿಕ ಚಟುವಟಿಕೆಗಳ ಸರ್ಪಡೆ ಹಾಗೂ ಚೆನ್ನಾಗಿ ಅರ್ಥಮಾಡಿಕೊಳ್ಳುವುದಕ್ಕಾಗಿ ಅಂತರ್ಜಾಲದ ಬಳಕೆ ಇವೆಲ್ಲ ರೂಢಿಗತ ವಿಚಾರಗಳಾಗುತ್ತಿರುವುದನ್ನೂ ನೋಡುವುದಕ್ಕೆ ಸಂತೋಷವಾಗುತ್ತದೆ. ಆದರೆ ಈ ಪ್ರಗತಿ ಹಾಗೂ ಸುಧಾರಣೆಯ ನಡುವೆ ಎಲ್ಲೋ ಬಹಳ ಪರಿಣಾಮಕಾರಿ ಹಾಗೂ ಪ್ರಮುಖವಾದ ಬೋಧನಾ ಸಹಾಯಕವಾದ ನಮ್ಮ ಕಪ್ಪು ಹಲಗೆ ಮೂಲೆಗುಂಪಾಗುತ್ತಿದೆ ಎಂಬುದು ದುರದೃಷ್ಟಕರ. ಶಿಕ್ಷಕರು ಕಪ್ಪು ಹಲಗೆಯ ಮೇಲೆ ಏನು ಬರೆಯುತ್ತಾರೋ ಅದು ಶಿಕ್ಷಕರೊಂದಿಗೆ ಮಕ್ಕಳು ಹೊಂದಬಲ್ಲ ಭಾವನಾತ್ಮಕ ಸಂಬಂಧಕ್ಕೆ ಸಹಕಾರಿಯಾಗುತ್ತದೆ ಎಂಬುದನ್ನು ನಾವಿಲ್ಲಿ ಅರ್ಥ ಮಾಡಿಕೊಳ್ಳಬೇಕು. ಇದು ಒಂದು ರೀತಿಯ ವೈಯಕ್ತೀಕರಿಸಿದ ಅಥವಾ ಆದೇಶಾನುಸಾರ ಸಿಗುವಂತಹ ಮಾಹಿತಿ. ಒಂದು ಪಿ ಪಿ ಟಿ ಗೆ ಹೋಲಿಸಿದರೆ ಕಪ್ಪುಹಲಗೆಯ ಮೇಲಿನ ಬರಹವು ಮಿಂಚಂಚೆಯ ಶುಭಾಶಯ ಪತ್ರ ಇಲ್ಲವೇ ಮೊಬೈಲಿನಲ್ಲಿ ಕಳಿಸಿದ ಪಠ್ಯ  ಸಂದೇಶಕ್ಕೂ ಕೈಯಲ್ಲಿ ಬರೆದು ಕಳಿಸಿದ ಪತ್ರ ಅಥವಾ ಚೀಟಿಗೂ ಇರುವ ವ್ಯತ್ಯಾಸದಂತೆ ಎನ್ನಬಹುದು.

ಈ ಕಪ್ಪು ಹಲಗೆಯ ಬರವಣಿಗೆಯು  ಎಷ್ಟು ಚೆನ್ನಾಗಿ ಯೋಜಿತವಾಗಿದ್ದರೆ ಕಲಿಕೆಯ ಮೇಲೆ ಬಹಳ ಪ್ರಭಾವವನ್ನು ಬೀರುತ್ತದೆ. ಬಹಳ ಸಲ, ಸ್ಮಾರ್ಟ್ ಹಲಗೆಯ ಮೇಲೆ ತೋರಿಸಿದ ವಿಷಯವು ಮಕ್ಕಳಿಗೆ ವಾಸ್ತವಾಭಾಸವನ್ನಷ್ಟೇ ಉಂಟು ಮಾಡುತ್ತದೆ, ಆದರೆ ಶಿಕ್ಷಕರು ತಮ್ಮ ಕೈಯಾರೆ ಏನು ಬರೆಯುತ್ತಾರೋ, ಅದನ್ನು ಹೇಗೆ ಬರೆಯುತ್ತಾರೋ ಅದು ವಿದ್ಯಾರ್ಥಿಗಳಿಗೆ ತಮಗೆ ಸಿಗುತ್ತಿರುವ ವಿವರಣೆಗೂ ಹಾಗೂ ಬರೆದ ವಿಷಯಕ್ಕೂ ಸಂಬಂಧ ಕಲ್ಪಿಸಿ ಒಂದು

ರೀತಿಯ 3-ಆಯಾಮಗಳುಳ್ಳ ಪರಿಣಾಮ ಕೊಡುತ್ತದೆ ಎಂಬುದನ್ನು ನಾವು ಮರೆತುಬಿಡುತ್ತೇವೆ.

ನನಗೆ ನನ್ನ 8ನೇ ತರಗತಿಯಲ್ಲಿ ಗಣಿತ ಕಲಿಸುತ್ತಿದ್ದ ಶಿಕ್ಷಕಿ ಬಹು ಒಪ್ಪವಾಗಿ, ಚೆನ್ನಾಗಿ ಯೋಜಿಸಿ ಬೋರ್ಡ್ ಮೇಲೆ ಬರೆಯುತ್ತಿದ್ದ ಕಾರಣಕ್ಕಾಗಿ ಬಹಳ ಇಷ್ಟವಾಗುತ್ತಿದ್ದುದು ಇನ್ನೂ ನೆನಪಿನಲ್ಲಿದೆ. ಲೆಕ್ಕದ ಪ್ರತಿ ಹೆಜ್ಜೆಯನ್ನೂ ಸ್ಪಷ್ಟವಾಗಿ ಕ್ರಮಬದ್ಧವಾಗಿ ಜೋಡಿಸಿರುತ್ತಿದ್ದರಿಂದ ನಮಗೆ ಸೂಕ್ಷ್ಮ ವಿವರಗಳನ್ನು ಪಡೆಯುವುದಕ್ಕಾಗಲೀ ಪರಿಕಲ್ಪನೆಗಳನ್ನು ಅರ್ಥಮಾಡಿಕೊಳ್ಳುವುದಕ್ಕಾಗಲೀ ಕಷ್ಟಪಡುವ ಪ್ರಮೇಯವೇ ಇರುತ್ತಿರಲಿಲ್ಲ. ಆಕೆಯ ಸುಂದರವಾದ ಕೈಬರಹ ನಮ್ಮೆಲ್ಲರಿಗೂ ನಮ್ಮ ಕೆಲಸವನ್ನು ಒಪ್ಪವಾಗಿ ಮಾಡಲು ಪ್ರೇರೇಪಿಸುತ್ತಿತ್ತು ಹಾಗೂ ಆ ಅಭ್ಯಾಸ ನಮ್ಮಲ್ಲಿ ಬಹಳಷ್ಟು ಜನರಲ್ಲಿ ಈಗಲೂ ಮುಂದುವರಿದುಕೊಂಡು ಬಂದಿದೆ. ರೇಖಾಗಣಿತವಾಗಲೀ, ತ್ರಿಕೋನಮಿತಿಯಾಗಲೀ (trigonometry), ಒಂದು ತರಗತಿಯಾಗಿ ನಾವು ಹಂತ ಹಂತಗಳಲ್ಲಿ ಲೆಕ್ಕ ಬಿಡಿಸಲು ಮತ್ತು ನಮ್ಮ ನೋಟ್ ಪುಸ್ತಕಗಳನ್ನು ಓರಣವಾಗಿಟ್ಟುಕೊಳ್ಳಲು ಕಲಿತೆವು.

ಸಾಮಾನ್ಯವಾಗಿ, ಬಹಳ ಆಸಕ್ತಿಕರ ಚಟುವಟಿಕೆಯೂ ಕೂಡ (ಪ್ರಾಯಶಃ ಮಾಧ್ಯಮಿಕ ಶಾಲೆಯಲ್ಲಿನ ಭೌತಶಾಸ್ತ್ರದ ತರಗತಿಯೋ ಅಥವಾ ರಸಾಯನಶಾಸ್ತ್ರದ ತರಗತಿಯೋ) ಅಥವಾ ಸುಂದರವಾಗಿ ಮಾಡಲ್ಪಟ್ಟ ಪಿ ಪಿ ಟಿ (ಜೀವಶಾಸ್ತ್ರದ್ದು) ಕೂಡ ಸರಿಯಾದ ಕಪ್ಪು ಹಲಗೆಯ ಬರವಣಿಗೆಯ ಆಧಾರವಿಲ್ಲದಿದ್ದರೆ ಅಷ್ಟು ಪರಿಣಾಮಕಾರಿಯಾದ ಕಲಿಕೆಯ ಅನುಭವವಾಗಿ ಹೊರ ಹೊಮ್ಮುವುದಿಲ್ಲ. ಒಬ್ಬ ಶಿಕ್ಷಕರು ತಮ್ಮ ಯಾವ ತರಗತಿಯಲ್ಲಾದರೂ ಸರಿ, ಜಾಣತನದ ಹಾಗೂ ಸಮರ್ಪಕವಾದ ಕಪ್ಪು ಹಲಗೆಯ ಬಳಕೆಯ ಮೂಲಕ ತಮ್ಮ ಒಂದು ವೈಯಕ್ತಿಕ ಸ್ಪರ್ಶ ಕೊಡಬಲ್ಲರಾದರೆ ಅದು ಯಾವಾಗಲೂ ಒಳ್ಳೆಯದು.

ಕನಿಷ್ಠ ಖರ್ಚು ಹಾಗೂ ಪ್ರಯತ್ನದಲ್ಲಿ, ಮಾಹಿತಿ ಪ್ರಸರಣೆಗೆ, ಪುನರಾವಲೋಕನಕ್ಕಾಗಿ (ಹಿಂದಿನ ಮತ್ತು ಈಗಿನ ತರಗತಿಯ) ಹಾಗೂ ಮುಖ್ಯ ಅಂಶಗಳಾದ ಸಮೀಕರಣಗಳು, ಸರಿಯಾದ ಕಾಗುಣಿತ, ಮುಖ್ಯ ಪದಗಳು ಮತ್ತಿತರ ಬಹು ವಿಷಯಗಳಿಗಾಗಿ ಕಪ್ಪುಹಲಗೆಯನ್ನು ಬಹಳ ಸುಂದರವಾಗಿ ಬಳಸಿಕೊಳ್ಳಬಹುದು. ಇದೆ ಕಾರಣಕ್ಕೆ ಬಹಳ ಉನ್ನತ ತಂತ್ರಜ್ಞಾನವುಳ್ಳ ತರಗತಿಗಳಲ್ಲಿ ಕೂಡ ಕಪ್ಪು ಹಲಗೆ ಇಲ್ಲದಿರುವುದಿಲ್ಲ.

ಇದಕ್ಕೆ ಮತ್ತಷ್ಟು ಸೇರಿಸುವುದಾದರೆ, ಕಪ್ಪು ಹಲಗೆಯು ಮಕ್ಕಳಿಗೆ ತಮ್ಮ ಕೆಲಸದಲ್ಲಿ ಹೆಚ್ಚು ವ್ಯವಸ್ಥಿತವಾಗಿ ಇರಲು, ಒಪ್ಪವಾಗಿರಲು ಪರೋಕ್ಷವಾಗಿ ತಯಾರಿ ಮಾಡುವ ಹಾಗೂ ತಮ್ಮ ದೈನಂದಿನ ಕೆಲಸಗಳನ್ನು ಅಥವಾ ಬರವಣಿಗೆಯ ಪರೀಕ್ಷೆಗಳಲ್ಲಿ ಚೆನ್ನಾದ ಪ್ರಸ್ತುತಿ ನೀಡಲು ಪ್ರೇರೇಪಿಸುವ ಒಂದು ಸಕ್ರಿಯ ಸಾಧನವಾಗಿದೆ.

ಕಪ್ಪು ಹಲಗೆಯನ್ನು ಸರಿಯಾದ ರೀತಿಯಲ್ಲಿ ಬಳಸುವ ಶಿಕ್ಷಕರು ಮಕ್ಕಳಿಗೆ ಒಬ್ಬ ಆದರ್ಶ ಮಾದರಿಯಾಗಬಲ್ಲರು ಹಾಗೂ ತಮ್ಮ ವಿದ್ಯಾರ್ಥಿಗಳಿಗೆ ಚೆನ್ನಾದ ಕೈಬರಹವನ್ನು ರೂಪಿಸಲು (ಚಲನಾ ಕೌಶಲ) ಮತ್ತು ಸ್ಥಳ ಹಾಗೂ ಸಂಪನ್ಮೂಲಗಳನ್ನು ಸಮರ್ಪಕವಾಗಿ ಬಳಸುವುದಕ್ಕೆ ಸಮರ್ಥ ಉದಾಹರಣೆಯಾಗಿ ನಿಲ್ಲಬಲ್ಲರು. ಇದು ಬರೀ ಪ್ರಾಥಮಿಕ ಶಾಲೆಗಳಲ್ಲಿ ಕಲಿಯುವ ಪುಟ್ಟ ಮಕ್ಕಳಿಗಷ್ಟೇ ಅಲ್ಲ ಬದಲಾಗಿ ವಿಶ್ವವಿದ್ಯಾಲಯಗಳಲ್ಲಿ ಕಲಿಯುವ ವಿದ್ಯರ್ಥಿಗಳಿಗೂ ಅನ್ವಯಿಸುತ್ತದೆ. ಹಲಗೆಯನ್ನು ಸರ್ಪಕವಾಗಿ ಬಳಸಿದ ಪ್ರಾಧ್ಯಾಪಕರುಗಳು ನನ್ನ ನೆಚ್ಚಿನ ಪ್ರಾಧ್ಯಪಕರಾಗಿದ್ದರು ಎಂಬುದನ್ನೇ ನಾನಿಲ್ಲಿ ಮತ್ತೊಮ್ಮೆ ಹೇಳಬಯಸುತ್ತೇನೆ.

ಕಪ್ಪು ಹಲಗೆಯನ್ನು ಬಳಸುವ ಮೊತ್ತೊಂದು ಮುಖ್ಯ ಅಂಶವೇನೆಂದರೆ ಇದು ವಿದ್ಯುಚ್ಛಕ್ತಿಯ ಮೂಲಗಳ ಮೇಲಿನ ಅವಲಂಬನೆಯನ್ನು ತಪ್ಪಿಸಿ ವಿದ್ಯಾರ್ಥಿಗಳ ಪರದೆ

ವೀಕ್ಷಣೆಯ ಸಮಯವನ್ನು ಕಡಿಮೆಗೊಳಿಸುತ್ತದೆ. ಇದು ವಿಶೇಷವಾಗಿ ಎಳೆಯ ತಲೆಮಾರಿನ ಮಕ್ಕಳು ಹೆಚ್ಚು ಹೆಚ್ಚು ಮೊಬೈಲ್ ಮತ್ತು ಕಂಪ್ಯೂಟರುಗಳ ಬಳಕೆ ಮಾಡುತ್ತಿರುವುದರಿಂದ ಚಿಂತಿಸುವ ವಿಷಯವೇ ಆಗಿದೆ.

ಶಿಕ್ಷಕರ ಕಪ್ಪು ಹಲಗೆಯ ಬರಹವು ಪ್ರತಿ ವಿದ್ಯಾರ್ಥಿಯ ಮನಸ್ಸಿನಲ್ಲಿಯೂ ಒಂದು ವೈಯಕ್ತಿಕ ಗುರುತನ್ನು ಅಚ್ಚೊತ್ತುತ್ತದೆ. ಅವರು ಏನನ್ನೇ ಪಾಠ ಮಾಡಲಿ ಅದಕ್ಕೊಂದು ಆಪ್ತತೆಯ ಸ್ಪರ್ಶ ನೀಡುತ್ತದೆ. ಆದ್ದರಿಂದ ನಾವು ಕಲಿಕೆಯನ್ನು ಒಂದು ಸಂತೋಷಭರಿತ ಪ್ರಕ್ರಿಯನ್ನಾಗಿ ಮಾಡುವ ನಿಟ್ಟಿನಲ್ಲಿ ಈ ಎಲ್ಲ ಹೊಸ ಹಾಗೂ ಅದ್ಭುತ ತಂತ್ರಗಳನ್ನು ಅಳವಡಿಸಿಕೊಂಡರೂ, ಸರಿಯಾಗಿ ಯೋಚಿಸದೆ ಹಳೆಯ ರೀತಿಗಳನ್ನು ಬಿಡದೇ ಇರೋಣ.

ಇದು ಹೇಗೆಂದರೆ: ನೀವು ಹೊಸ ಗೆಳೆಯರನ್ನು ಸಂಪಾದಿಸಿದಾಗ ಹಳೆಯ ಗೆಳೆಯರನ್ನು ಮರೆತುಬಿಡುವುದಿಲ್ಲವಲ್ಲ, ಹಾಗೆ.

***

**ಫರ್ಹೀನಾ ಸಲೀಂ:** ಇವರು ಪ್ರಸ್ತುತ ಬೆಂಗಳೂರಿನ ಕ್ರಿಸ್ಟಲ್ ಶಾಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಇದು ಒಂದು ಸರ್ಕಾರೇತರ ಸಂಸ್ಥೆಯಿಂದ ನಡೆಸಲ್ಪಡುವ, ಸೌಕರ್ಯ ವಂಚಿತ ಹಾಗೂ ಆರ್ಥಿಕವಾಗಿ ಹಿಂದುಳಿದ ಮಕ್ಕಳಿಗೆಂದೇ ಇರುವ ವಿಶೇಷ ಶಾಲೆಯಾಗಿದೆ. ಇವರು ದೆಹಲಿ ವಿಶ್ವವಿದ್ಯಾಲಯದಿಂದ ಭೌತಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದಿದ್ದು ಆಸ್ಟ್ರೋಫಿಸಿಕ್ಸ್ ಮತ್ತು ಪ್ಲಾಸ್ಮಾ ಫಿಸಿಕ್ಸ್ ವಿಷಯದಲ್ಲಿ ವಿಶೇಷ ಅಧ್ಯಯನ ಮಾಡಿದ್ದಾರೆ. ಇದೇ ವಿಶ್ವವಿದ್ಯಾಲಯದಲ್ಲೇ ಇವರು ಶಿಕ್ಷಣದಲ್ಲಿ ಪದವಿಯನ್ನು ಕೂಡ ಪಡೆದಿದ್ದಾರೆ. ಕಳೆದ 15 ವರ್ಷಗಳಿಂದ ಶಿಕ್ಷಕಿಯಾಗಿ ಹಾಗೂ ಶಿಕ್ಷಣಾರ್ಥಿಯಾಗಿರುವ ಇವರಿಗೆ ಆ ಬಗ್ಗೆ ಬಹಳ ಹೆಮ್ಮೆ ಇದೆ. ಹದಿವಯಸ್ಸಿನ ಅಂತ್ಯದಲ್ಲಿರುವ ಮಕ್ಕಳನ್ನು (10-12ನೇ ದರ್ಜೆ) ನಿಭಾಯಿಸಿರುವ ಅನುಭವವಿರುವ ಇವರು ತಮ್ಮ ಶಿಕ್ಷಣದ ಪಯಣದಲ್ಲಿ ತಾಳ್ಮೆ ಹಾಗೂ ಕರುಣೆಯ ಗುಣಗಳನ್ನು ಚೆನ್ನಾಗಿ ಕಲಿತಿದ್ದಾರೆ. ಅವರ ಸಂಪರ್ಕಕ್ಕೆ: farheena1530@gmail.com

ಅನುವಾದ: ಸ್ವಯಂಪ್ರಭಾ ಹೆಗಡೆ ಪರಿಶೀಲನೆ: ನಾಗಮಣಿ ಎಸ್.ಎನ್.